| Classes of Officers and Servants | Authority Competent to impose penalties | Appellate Authorities |
|---|---|---|
| **Officers and Servants whose monthly Salaries:** | | |
| 1. Does not exceed One Thousand Five Hundred Rupees | Commissioner | Authority |
| 2. Exceeds One Thousand and Five Hundred Rupees | Authority | Government |

**Schedule-II**

Authorities competent to sanction leave to the Authority employees are indicated below:

| Categories of employees to whom leave can be sanctioned and the maximum duration the there of | | | |
|---|---|---|---|
| **Authorities Competent to sanction Leave** | **In the pay Scale of Rs:2200-4070 and above** | **In the pay Scale of Rs:1720-3170 and below Rs:2200-4070 2,200-4,070.** | **In the pay Scale of Rs:780-1040 and above but below Rs:1720-3170 1,720-3,170** |
| Commissioner | Four Month | Six Month | Full Powers |
| Authority | Six Month | Eight Month | Four Months |
| Government | Full Power | Full Powers | Full Powers |

**Schedule-II**

Authorities competent to impose penalties under rule 8 of the Karnataka Civil Services (Classification, Control and Appeal) Rules, 1957 and the Authority to whom an appeal lies against such order of imposition of penalties appointing authorities have been specified in the regulations 1994 and section 52 of the Karnataka Urban Development Authorities Act, 1987.

| Si No | Authority empowered to impose penalties which he may impose | | | |
|---|---|---|---|---|
| | **Classes of Post** | **Authority** | **Penalties (See rules 8 of Karnataka Civil Services (Classification Control and Appeal Rules,1957)** | **Appellate Authorities** |
| | **1** | **2** | **3** | **4** |
| 1 | Group-A | Government | (ii) To (Viii) | - |
| 2 | Group-B | Government | (ii) To (Viii) | - |
| 3 | Group-C | Commissioner<br>Authority | (ii) To (iVa)<br>(V) To (Viii) | Authority<br>Government |
| 4 | Group-D | Commissioner | (ii) To (iVa)<br>(V) To (Viii) | Authority<br>Authority |

The Categories of costs falling in the purview of Group 'A' Group 'B' Group 'C' and Group 'D' are as specified in rule 5 of the Karanataka Civil Services (Classification, Control and Appeal) Rules, 1957.

**PD. 94** **Commissioner**

**SC. 25** **Hospet Urban Development Authority, Hospet**

## ಉತ್ತರ ಕನ್ನಡ ಜಿಲ್ಲಾ ಪಂಚಾಯತ ಕಾರವಾರ ಕಚೇರಿಯ ನಡವಳಿಗಳು

**ವಿಷಯ:–** ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993ರ ಸೆಕ್ಷನ್ 268(1)ರನ್ವಯ ಸಾಂಬ್ರಾಣಿ ಗ್ರಾಮ ಪಂಚಾಯತವನ್ನು ವಿಸರ್ಜನೆ ಮಾಡುವ ಕುರಿತು

**ಓದಲಾಗಿದೆ:–**

1. ಕಾರ್ಯನಿರ್ವಾಹಕ ಅಧಿಕಾರಿ, ತಾ. ಪಂ. ಹಳಿಯಾಳ ಇವರ ಪತ್ರ ದಿ: 31–01–2014, 10–03–2014, 06–06–2014 ಹಾಗೂ 14–07–2014
2. ಹಳಿಯಾಳ ತಾಲೂಕು ಪಂಚಾಯತದ ಸಾಮಾನ್ಯ ಸಭೆ ದಿ: 03–03–2014
3. ಪಂಚಾಯತ ಅಭಿವೃದ್ಧಿ ಅಧಿಕಾರಿ, ಗ್ರಾ.ಪಂ. ಸಾಂಬ್ರಾಣಿ ಇವರ ಸಭೆಯ ನೋಟಿಸು ಸಂ. ಗ್ರಾಪಂ/ಸಾಂಬ್ರಾಣಿ/ಸ.ನೋಟಿಸು/2013–14 ದಿ: 19–11–2013, 16–12–2013, 16–01–2014, 24–01–2014, 30–01–2014 ಹಾಗೂ 22–05–2014
4. ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993 ರ ಸೆಕ್ಷನ್ 52 ಹಾಗೂ ಸೆಕ್ಷನ್ 268(1)

5. ಈ ಕಾರ್ಯಾಲಯದ ನೋಟಿಸು ಸಂ. ಜಿಪಂಆ/ಗ್ರಾಪಂ/ಸಾಂಬ್ರಾಣಿ/ 2014–15 ದಿನಾಂಕ: 01–08–2014
6. ಅಧ್ಯಕ್ಷರು, ಗ್ರಾ.ಪಂ.ಸಾಂಬ್ರಾಣಿ ಇವರ ಪತ್ರ ಸಂ. ಗ್ರಾಪಂ/ಸಾಂಬ್ರಾಣಿ/ ಪತ್ರ ಸಂ. 2014–15 ದಿನಾಂಕ: 14–08–2014
7. ಗ್ರಾ.ಪಂ. ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯರುಗಳ ಹೇಳಿಕೆ ದಿನಾಂಕ: 14–08–2014/18–08–2014
8. ಅಧೀನ ಕಾರ್ಯದರ್ಶಿಗಳು, ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಇವರ ಪತ್ರ ಸಂ. ರಾಚುಆ/25/ನ್ಯಾಪ್ರಜಿಪಿ/2014 ದಿನಾಂಕ: 12–05–2014
9. ಜಿಲ್ಲಾ ಪಂಚಾಯತ ಸಾಮಾನ್ಯ ಸಭೆ ದಿನಾಂಕ: 20–09–2014

**ಪ್ರಸ್ತಾವನೆ:**

ಹಳಿಯಾಳ ತಾಲೂಕಿನ ಸಾಂಬ್ರಾಣಿ ಗ್ರಾಮ ಪಂಚಾಯತದಲ್ಲಿ ನಿಯಮಾನುಸಾರ ಸಭೆಗಳು ನಡೆಯದೆಯೇ ಆಡಳಿತ ವ್ಯವಸ್ಥೆಗೆ ತೊಂದರೆ ಆಗುತ್ತಿರುವ ಕುರಿತು ಕಾರ್ಯನಿರ್ವಾಹಕ ಅಧಿಕಾರಿ, ತಾಲೂಕು ಪಂಚಾಯತ, ಹಳಿಯಾಳ ಇವರು ಮೇಲೆ ಓದಲಾದ ಕ್ರ.ಸಂ. (1)ರ ಪತ್ರ ದಿನಾಂಕ: 31–01–2014, 10–03–2014, 06–06–2014 ಹಾಗೂ 14–07–2014ರಲ್ಲಿ ವರದಿ ಸಲ್ಲಿಸಿದ್ದಾರೆ. ಗ್ರಾಮ ಪಂಚಾಯತದ ಆಡಳಿತ ಹಿತದೃಷ್ಟಿಯಿಂದ ಸಾಂಬ್ರಾಣಿ ಗ್ರಾಮ ಪಂಚಾಯತಕ್ಕೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡುವಂತೆ ಜಿಲ್ಲಾ ಪಂಚಾಯತಕ್ಕೆ ಪ್ರಸ್ತಾವನೆ ಸಲ್ಲಿಸಲು ದಿನಾಂಕ: 03–03–2014ರ ತಾಲೂಕು ಪಂಚಾಯತ, ಹಳಿಯಾಳದ ಸಾಮಾನ್ಯ ಸಭೆಯಲ್ಲಿ ನಿರ್ಣಯ ಕೈಗೊಳ್ಳಲಾಗಿದೆ. ದಿನಾಂಕ: 26–11–2013, 24–01–2014, 30–01–2014, 06–02–2014 ಹಾಗೂ 30–05–2014 ರಂದು ಗ್ರಾಮ ಪಂಚಾಯತ ಸಾಮಾನ್ಯ ಸಭೆ ನಡೆಸುವ ಬಗ್ಗೆ ಸದಸ್ಯರುಗಳಿಗೆ ನೋಟಿಸು ಜಾರಿ ಮಾಡಿ ಅವರ ಸಹಿ ಪಡೆದಿರುವ ಬಗ್ಗೆ ಪಂಚಾಯತ ಅಭಿವೃದ್ಧಿ ಅಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (3) ರನ್ವಯ ನೋಟಿಸಿನ ಪ್ರತಿ ಸಲ್ಲಿಸಿರುತ್ತಾರೆ. ಮೇಲಿನ ಸಭೆಗಳಿಗೆ ಹಾಜರಾದ ಸದಸ್ಯರ ವಿವರಗಳನ್ನು ಗ್ರಾಮ ಪಂಚಾಯತದಿಂದ ಪಡೆಯಲಾಗಿದ್ದು, ಸದರಿ ವಿವರಗಳನ್ನು ಪರಿಶೀಲಿಸಲಾಗಿ, ಮೇಲಿನ ಸಭೆಗಳು ಕೋರಂ ಇಲ್ಲದ ಕಾರಣ ಸಭೆಗಳು ರದ್ದಾಗಿರುವುದು ಕಂಡುಬಂದಿದೆ.

ಸಾಂಬ್ರಾಣಿ ಗ್ರಾಮ ಪಂಚಾಯತದ ಸಭೆಗಳಿಗೆ ಸದಸ್ಯರು ಗೈರು ಹಾಜರಾಗುತ್ತಿರುವ ಪ್ರಕರಣವನ್ನು ರಾಜ್ಯ ಚುನಾವಣಾ ಆಯೋಗವು ಪರಿಶೀಲಿಸಿದ್ದು, ಮೇಲೆ ಓದಲಾದ ಕ್ರ.ಸಂ. (8)ರ ಪತ್ರ ದಿನಾಂಕ: 12–05–2014 ರಲ್ಲಿ ಈ ಕೆಳಗಿನಂತೆ ನಿರ್ದೇಶಿಸಿರುತ್ತದೆ.

"ಸಾಂಬ್ರಾಣಿ ಗ್ರಾಮ ಪಂಚಾಯತಿಯ ಸದಸ್ಯರಾದ ಶ್ರೀ ಕೃಷ್ಣ ರೇವಣ್ಣ ಕೋಸುರ ಮತ್ತು ಶ್ರೀಮತಿ ಪಾರ್ವತಿ ತಿಮ್ಮಣ್ಣ ವಡ್ಡರ ರವರು ದಿನಾಂಕ: 26–11–2013, 28–12–2013, 24–01–2014, 30–01–2014 ಮತ್ತು 06–02–2014 ರಂದು ಜರುಗಿದ ಸಾಮಾನ್ಯ ಸಭೆಗಳಿಗೆ ಗೈರು ಹಾಜರಾಗಿರುವುದರಿಂದ ಸದರಿಯವರ ವಿರುದ್ಧ ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993ರ ಪ್ರಕರಣ, 13(1)(ಸಿ) ಅನ್ವಯ ಕ್ರಮ ಕೈಗೊಳ್ಳುವಂತೆ ಕೋರಿ, ಉಲ್ಲೇಖಿತ ಪ್ರಸ್ತಾವನೆಯನ್ನು ಸಲ್ಲಿಸಿರುತ್ತೀರಿ. ಪರಿಶೀಲಿಸಲಾಗಿ ದಿನಾಂಕ: 26–11–2013 ಮತ್ತು 24–01–2014 ರ ಸಭೆಗಳನ್ನು ಕೋರಂ ಇಲ್ಲದ ಕಾರಣ ಮುಂದೂಡಲ್ಪಟ್ಟಿದ್ದು, ಅವುಗಳು ಅನುಕ್ರಮವಾಗಿ ದಿನಾಂಕ: 28–12–2013 ಮತ್ತು 30–01–2014 ರಂದು ಜರುಗಿರುವುದು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಸದರಿ ಸದಸ್ಯರು ದಿನಾಂಕ: 28–12–2013, 30–01–2014 ಮತ್ತು 06–02–2014 ರಂದು ಜರುಗಿದ ಸಭೆಗಳಿಗೆ, ನೋಟಿಸ್‌ನ್ನು ಸ್ವೀಕರಿಸಿಯೂ ಗೈರು ಹಾಜರಾಗಿರುತ್ತಾರೆ.

ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993ರ ಪ್ರಕರಣ, 13(1)(ಸಿ) ಅನ್ವಯ ಗ್ರಾಮ ಪಂಚಾಯತಿಯ ಸದಸ್ಯರು ಮೂರಕ್ಕಿಂತ ಹೆಚ್ಚು ಸತತವಾಗಿ ನಡೆದ ಸಾಮಾನ್ಯ ಸಭೆಗಳಿಗೆ ಗೈರು ಹಾಜರಾಗಿದ್ದಲ್ಲಿ ಮಾತ್ರ ಅವರ ವಿರುದ್ಧ ಕ್ರಮ ವಹಿಸಬಹುದಾಗಿರುತ್ತದೆಂದು ತಮಗೆ ತಿಳಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ."

ಗ್ರಾಮ ಪಂಚಾಯತ, ಸಾಂಬ್ರಾಣಿಯಲ್ಲಿ ದಿನಾಂಕ: 26-11-2013, 24-01-2014, 30-01-2014, 06-02-2014 ಹಾಗೂ 30-05-2014 ಗಳಂದು ನಿಗದಿ ಪಡಿಸಲಾದ ಸಭೆಗಳು ಕೋರಂ ಇಲ್ಲದ ಕಾರಣ ರದ್ದಾಗಿದ್ದು, ಇವುಗಳನ್ನು ರಾಜ್ಯ ಚುನಾವಣಾ ಆಯೋಗದ ಪತ್ರದನ್ವಯ "ನಡೆದ ಸಭೆಗಳೆಂದು" ಪರಿಗಣಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಸದಸ್ಯರ ಸದಸ್ಯತ್ವ ರದ್ದುಗೊಳಿಸಲು ಅವಕಾಶ ಇರುವುದಿಲ್ಲ.

ಕಾರ್ಯನಿರ್ವಾಹಕ ಅಧಿಕಾರಿ, ತಾಲೂಕು ಪಂಚಾಯತ, ಹಳಿಯಾಳ ಇವರ ಪತ್ರ ದಿನಾಂಕ: 06–06–2014 ರಲ್ಲಿನ ವರದಿಯಂತೆ ದಿನಾಂಕ: 24–01–2014, 30–01–2014, 06–02–2014, 30–05–2014 ರಂದು ಕರೆಯಲಾದ ಸಭೆಗಳಿಗೆ ಕೋರಂ ಇಲ್ಲದೇ ಸಭೆ ನಡೆದಿರುವುದಿಲ್ಲ. ಕೋರಂ ಅಭಾವದಿಂದಾಗಿ ಸಭೆ ನಡೆಸಿಲ್ಲವೆಂದು ಕಾರ್ಯನಿರ್ವಾಹಕ ಅಧಿಕಾರಿಗಳು ತಾಲೂಕು ಪಂಚಾಯತ, ಹಳಿಯಾಳ ಇವರು ವರದಿ ಮಾಡಿರುತ್ತಾರೆ.

ಸಾಂಬ್ರಾಣಿ ಗ್ರಾಮ ಪಂಚಾಯತದಲ್ಲಿ ನಿಯಮಾನುಸಾರ ಸಭೆಗಳು ನಡೆಯದಿರುವುದರಿಂದ, ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ಹಿನ್ನೆಡೆ ಉಂಟಾಗಿದ್ದು, ಆಡಳಿತ ವ್ಯವಸ್ಥೆಯು ಹದಗೆಟ್ಟಿರುವುದು ಸಾಂಬ್ರಾಣಿ ಗ್ರಾಮ ಪಂಚಾಯತದ ಪಂಚಾಯತ ಅಭಿವೃದ್ಧಿ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಅಧಿಕಾರಿ, ತಾಲೂಕು ಪಂಚಾಯತ, ಹಳಿಯಾಳ ರವರ ವರದಿಗಳಿಂದ ಕಂಡುಬರುತ್ತದೆ. ಗ್ರಾಮ ಪಂಚಾಯತ ಸದಸ್ಯರ ಮೇಲೆ ಕ್ರಮ ಜರುಗಿಸಲು ಈ ಮೇಲೆ ತಿಳಿಸಿರುವಂತೆ ಅವಕಾಶ ಇಲ್ಲದಿರುವುದರಿಂದ, ಗ್ರಾಮ ಪಂಚಾಯತವನ್ನು ವಿಸರ್ಜನೆಗೊಳಿಸಿ, ಪಂಚಾಯತಕ್ಕೆ ಆಡಳಿತಾಧಿಕಾರಿಯನ್ನು ನೇಮಕಗೊಳಿಸುವುದು ಆಡಳಿತದ ಹಿತದೃಷ್ಟಿಯಿಂದ ಸೂಕ್ತವಿರುವುದನ್ನು ಗಮನಿಸಿದೆ.

ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993ರ ಸೆಕ್ಷನ್ 268(1) ರಂತೆ ಗ್ರಾಮ ಪಂಚಾಯತಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಅಥವಾ ಇತರೇ ಯಾವುದೇ ಕಾನೂನಿನ ಅಡಿಯಲ್ಲಿ ವಿಧಿಸಿರುವ ಕರ್ತವ್ಯಗಳನ್ನು ನಿರ್ವಹಿಸಲು ಸಕ್ಷಮವಾಗಿಲ್ಲದಿದ್ದಲ್ಲಿ, ಅಥವಾ ಅವುಗಳನ್ನು ನೆರವೇರಿಸಲು ಸತತವಾಗಿ ತಪ್ಪಿದಲ್ಲಿ ತಾಲೂಕು ಪಂಚಾಯತದ ಶಿಫಾರಸ್ಸಿನ ಮೇಲೆ ಜಿಲ್ಲಾ ಪಂಚಾಯತಿಯು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ

ಅಂಥಹ ಗ್ರಾಮ ಪಂಚಾಯತಿಯನ್ನು ವಿಸರ್ಜಿಸಬಹುದಾಗಿದೆ. ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993ರ ಸೆಕ್ಷನ 52ರನ್ವಯ ಗ್ರಾಮ ಪಂಚಾಯತಿಯು ಕಾರ್ಯ ಕಲಾಪವನ್ನು ನಡೆಸುವುದಕ್ಕಾಗಿ, ಗ್ರಾಮ ಪಂಚಾಯತ ಕಚೇರಿಯಲ್ಲಿ ಕನಿಷ್ಠ ಪಕ್ಷ ತಿಂಗಳಿಗೊಮ್ಮೆ ಗ್ರಾಮ ಪಂಚಾಯತ ಸಭೆ ನಡೆಸಬೇಕಿದ್ದು, ಸಾಂಬ್ರಾಣಿ ಗ್ರಾಮ ಪಂಚಾಯತದಲ್ಲಿ ಕಳೆದ ಎಂಟು ತಿಂಗಳುಗಳಿಂದ ಸಭೆ ನಡೆಯದಿರುವುದರಿಂದ, ದೈನಂದಿನ ಕಾರ್ಯ ಹಾಗೂ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಂಡಿರುವುದು ಕಂಡುಬಂದಿದೆ.

ಸಾಂಬ್ರಾಣಿ ಗ್ರಾಮ ಪಂಚಾಯತವು ತನ್ನ ಶಾಸನಬದ್ಧ ಕರ್ತವ್ಯಗಳನ್ನು ನಿರ್ವಹಿಸಲು ವಿಫಲವಾಗಿರುವುದರಿಂದ, ಪಂಚಾಯತವನ್ನು ವಿಸರ್ಜನೆಗೊಳಿಸುವ ಕ್ರಮದ ಬಗ್ಗೆ ಆಕ್ಷೇಪಣೆ ಇದ್ದಲ್ಲಿ, 15 ದಿನಗಳ ಒಳಗಾಗಿ ಆಕ್ಷೇಪಣೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರ.ಸಂ. (5)ರ ಜಿಲ್ಲಾ ಪಂಚಾಯತ ನೋಟಿಸು ದಿನಾಂಕ: 01–08–2014ರಲ್ಲಿ ಸಾಂಬ್ರಾಣಿ ಗ್ರಾಮ ಪಂಚಾಯತದ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯರಿಗೆ ತಿಳಿಸಲಾಗಿತ್ತು. ಸದರಿಯವರು ಮೇಲೆ ಓದಲಾದ ಕ್ರ.ಸಂ. (7)ರ ವಿವರಣೆಗಳಲ್ಲಿ, ಕೆಲವೊಂದು ಸದಸ್ಯರು ಉದ್ದೇಶಪೂರ್ವಕವಾಗಿ ಗ್ರಾಮ ಪಂಚಾಯತ ಸಭೆಗಳಿಗೆ ಗೈರು ಹಾಜರಾಗುತ್ತಿದ್ದು, ಅಧ್ಯಕ್ಷರು ತಮ್ಮ ವಿವೇಚನಾತ್ಮಕ ಅಧಿಕಾರ ಚಲಾಯಿಸಿ ಸಾಮಾನ್ಯ ಸಭೆ ನಡೆಸಲು ಅವಕಾಶ ಮಾಡಿ ಕೊಡುವಂತೆಯೂ, ವಿವರಣಾತ್ಮಕ ಆಕ್ಷೇಪಣೆ ಸಲ್ಲಿಸಲು ಹೆಚ್ಚಿನ ಕಾಲಾವಕಾಶ ನೀಡುವಂತೆಯೂ ಕೋರಿರುತ್ತಾರೆ. ಕರ್ನಾಟಕ ಪಂಚಾಯತ ರಾಜ್ ಅಧಿನಿಯಮದಡಿ ಕೋರಂ ಇಲ್ಲದೆಯೇ ಸಭೆ ನಡೆಸಲು ಹಾಗೂ ಜಿಲ್ಲಾ ಪಂಚಾಯತ ನೋಟಿಸಿಗೆ ಆಕ್ಷೇಪಣೆ ಸಲ್ಲಿಸಲು ಹೆಚ್ಚಿನ ಕಾಲಾವಕಾಶ ನೀಡುವ ಬಗ್ಗೆ ಅವಕಾಶ ಕಲ್ಪಿಸದಿರುವುದರಿಂದ ಗ್ರಾಮ ಪಂಚಾಯತ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯರ ವಿವರಣೆಯನ್ನು ಒಪ್ಪಿಕೊಳ್ಳಲಾಗುವುದಿಲ್ಲ.

ಮೇಲೆ ವಿವರಿಸಿದ ಕಾರಣಗಳಿಂದಾಗಿ ಆಡಳಿತ ಹಿತದೃಷ್ಟಿಯಿಂದ ಸಾಂಬ್ರಾಣಿ ಗ್ರಾಮ ಪಂಚಾಯತವನ್ನು ವಿಸರ್ಜನೆಗೊಳಿಸುವ ಬಗ್ಗೆ ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ ಸೆಕ್ಷನ್ 268(1) ರ ಪ್ರಕಾರ ನಿರ್ಣಯ ಕೈಗೊಳ್ಳಲು ದಿ: 20–09–2014ರ ಜಿಲ್ಲಾ ಪಂಚಾಯತ ಸಾಮಾನ್ಯ ಸಭೆಯಲ್ಲಿ ವಿಷಯ ಮಂಡಿಸಿ ಚರ್ಚಿಸಲಾಗಿದೆ. ಕಾರ್ಯನಿರ್ವಾಹಕ ಅಧಿಕಾರಿ, ತಾಲೂಕ ಪಂಚಾಯತ, ಹಳಿಯಾಳ ಇವರ ವರದಿಯಂತೆ, ದಿನಾಂಕ: 03.03.2014ರಂದು ನಡೆದಿರುವ ತಾಲೂಕಾ ಪಂಚಾಯತ ಸಾಮಾನ್ಯ ಸಭೆಯಲ್ಲಿ ಸಾಂಬ್ರಾಣಿ ಗ್ರಾಮ ಪಂಚಾಯತದ ಮೇಲೆ ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993 ರ ಸೆಕ್ಷನ್ 268(1) ರ ಪ್ರಕಾರ ಕ್ರಮ ಕೈಗೊಳ್ಳಲು ಸರ್ವಾನುಮತದ ನಿರ್ಣಯ ಕೈಗೊಳ್ಳಲಾಗಿರುತ್ತದೆ. ಸದರಿ ಅಧಿನಿಯಮದನ್ವಯ ಯಾವುದೇ ಗ್ರಾಮ ಪಂಚಾಯತಿಯು ತತ್ಕಾಲದಲ್ಲಿ ಜ್ಯಾರಿಯಲ್ಲಿರುವ ಅಥವಾ ಇತರೆ ಕಾನೂನಿನ ಅಡಿಯಲ್ಲಿ ಅದಕ್ಕೆ ವಿಧಿಸಿರುವ ಕರ್ತವ್ಯಗಳನ್ನು ನೆರವೇರಿಸಲು ಸಕ್ಷಮವಾಗಿರದಿದ್ದಲ್ಲಿ ಅಥವಾ ಅವುಗಳನ್ನು ನೆರವೇರಿಸಲು ಸತತವಾಗಿ ತಪ್ಪಿದ್ದಲ್ಲಿ ಅಂಥಹ ಗ್ರಾಮ ಪಂಚಾಯತವನ್ನು ವಿಸರ್ಜಿಸಲು ಜಿಲ್ಲಾ ಪಂಚಾಯತವು ಅಧಿಕಾರ ಹೊಂದಿರುತ್ತದೆ ಎನ್ನುವುದನ್ನು ಸಭೆಯು ಗಣನೆಗೆ ತೆಗೆದುಕೊಂಡು ಸಾಂಬ್ರಾಣಿ ಗ್ರಾಮ ಪಂಚಾಯತವು ಕರ್ನಾಟಕ ಪಂಚಾಯತ ರಾಜ್ ಅಧಿನಿಯಮ 1993 ರಂತೆ ತನ್ನ ಕರ್ತವ್ಯವನ್ನು ನೆರವೇರಿಸಲು ಸತತವಾಗಿ ತಪ್ಪಿರುವುದನ್ನು ಅಂಗೀಕರಿಸಿ ಸಾಂಬ್ರಾಣಿ ಗ್ರಾಮ ಪಂಚಾಯತವನ್ನು ವಿಸರ್ಜನೆಗೊಳಿಸಲು ಅನುಮೋದನೆ ನೀಡಿರುತ್ತದೆ. ಪ್ರಯುಕ್ತ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂ. ಜಿಪಂಅ/ಗ್ರಾಪಂ/ಸ.ಸಂ.ವಿಷಯ/ಸಿಆರ್–29/12–13/14–15 ದಿನಾಂಕ: 07 –10–2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಳಿಯಾಳ ತಾಲೂಕಿನ ಸಾಂಬ್ರಾಣಿ ಗ್ರಾಮ ಪಂಚಾಯತವು ನಿಯಮಾನುಸಾರ ಗ್ರಾಮ ಪಂಚಾಯತ ಸಭೆಗಳನ್ನು ನಡೆಸದಿರುವ ಮೂಲಕ ತನ್ನ ಶಾಸನಬದ್ಧ ಕರ್ತವ್ಯ ನಿರ್ವಹಿಸಲು ವಿಫಲವಾಗಿರುವ ಬಗ್ಗೆ ದಿನಾಂಕ: 20–09–2014 ರಂದು ನಡೆದ ಜಿಲ್ಲಾ ಪಂಚಾಯತ ಸಾಮಾನ್ಯ ಸಭೆಯಲ್ಲಿ ಚರ್ಚಿಸಲಾಗಿದೆ. ಸಭೆಯು ಸಾಂಬ್ರಾಣಿ ಗ್ರಾಮ ಪಂಚಾಯತವನ್ನು ವಿಸರ್ಜನೆಗೊಳಿಸುವ ನಿರ್ಣಯ ಕೈಗೊಂಡಿದ್ದು, ಪಂಚಾಯತ ರಾಜ್ ಅಧಿನಿಯಮ 1993ರ ಸೆಕ್ಷನ್ 268(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಾಂಬ್ರಾಣಿ ಗ್ರಾಮ ಪಂಚಾಯತವನ್ನು ತಕ್ಷಣದಿಂದ ಅನ್ವಯವಾಗುವಂತೆ ವಿಸರ್ಜನೆಗೊಳಿಸಿ ಆದೇಶಿಸಿದೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ,
ಜಿಲ್ಲಾ ಪಂಚಾಯತ, ಉತ್ತರ ಕನ್ನಡ ಕಾರವಾರ.

**ಅಧ್ಯಕ್ಷರು,**
ಜಿಲ್ಲಾ ಪಂಚಾಯತ,
ಉತ್ತರಕನ್ನಡ, ಕಾರವಾರ.

**PR. 849**

## ತಹಶೀಲ್ದಾರ್‌ರವರ ಕಾರ್ಯಾಲಯ ಬೆಂಗಳೂರು ಪೂರ್ವ ತಾಲ್ಲೂಕು ಕೆ.ಆರ್.ಪುರ.

**ನಂ: ಎಲ್‌ಎನ್‌ಡಿ/ಕೆ.ಆರ್.ಪಿ/.ಸಿಆರ್:157/13–14 ದಿ: 7–11–2014**

**ಸಾರ್ವಜನಿಕ ಪ್ರಕಟಣೆ**

**ನಮೂನೆ – 27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ.**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿ 0–25 ಗುಂಟೆ 'ಬಿ' ಖರಾಬು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 0–25 ಗುಂಟೆ 'ಬಿ' ಖರಾಬು ಜಮೀನಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು 0–25 ಗುಂಟೆ 'ಬಿ' ಖರಾಬು ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೆ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | ಆರ್.ನಾರಾಯಣಪುರ |
| ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ವೆ ನಂಬರ್ | ಸ.ನಂ.1/1ರಲ್ಲಿ 0–25 ಗುಂಟೆ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | 'ಬ' ಖರಾಬು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 0–25 ಗುಂಟೆ |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ ಅಥವಾ ಅದರ ಭಾಗ | ಆರ್.ನಾರಾಯಣಪುರ ಗ್ರಾಮ |

**ತಹಶೀಲ್ದಾರ್,**

PR. 855

ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

## ಗೃಹ ಆಯುಕ್ತರವರ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.

### ಭೂಸ್ವಾಧೀನ ಕಾಯ್ದೆ ಕಲಂ 16(2)ರ ತಿದ್ದುಪಡಿ ಅಧಿಸೂಚನೆ

### ಅಧಿಸೂಚನೆಯ ಕ್ರಮಾಂಕ: ಕಗೃಮಂ/ ಭೂಸ್ವಾವಿ/ 35/2006-07, ದಿನಾಂಕ: 31-10-2014.

ಭೂಸ್ವಾಧೀನ ಅಧಿನಿಯಮ 1894 ಸೆಕ್ಷನ್ 16(2)ರನ್ವಯ ಕ್ರಮ ಸಂ: ಕಗೃಮಂ/ ಭೂಸ್ವಾವಿ/ 35/2006-07 ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 17/1961ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಕರ್ನಾಟಕ ರಾಜ್ಯಪತ್ರದ ದಿನಾಂಕ: 31-01-2013ರ ಭಾಗ-3ರ ಪುಟ ಸಂ: 296ರಿಂದ 303ರಲ್ಲಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಪ್ರಕಟಿಸಿರುವುದು ಸರಿಯಷ್ಟೆ. ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಯನ್ನು ಮಾಡಿ ಪ್ರಕಟಣೆ ಹೊರಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ರಾಮನಗರ ತಾಲ್ಲೂಕು: ರಾಮನಗರ ಹೋಬಳಿ: ಬಿಡದಿ ಗ್ರಾಮ: ಕಾಕರಾಮನಹಳ್ಳಿ**

| ಕಲಂ 16(2)ರಂತೆ ಪ್ರಕಟವಾಗಿರುವುದು | | | | | | ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು | | | | |
|---|---|---|---|---|---|---|---|---|---|---|
| ಕ್ರ. ಸಂ. | ಸ. ನಂ: | ತರಹೆ | ವಿಸ್ತೀರ್ಣ ಎ-ಗುಂ | ಮಂಡಳಿ ವಶಕ್ಕೆ ಪಡೆದುಕೊಂಡ ದಿನಾಂಕ | | ಕ್ರ. ಸಂ. | ಸ. ನಂ: | ತರಹೆ | ವಿಸ್ತೀರ್ಣ ಎ-ಗುಂ | ಮಂಡಳಿ ವಶಕ್ಕೆ ಪಡೆದುಕೊಂಡ ದಿನಾಂಕ |
| 47 | 22/2ಬಿ | ಖುಷ್ಕಿ | 1-05<br>1-20<br>0-01ಖ | 17-01-2012<br>07-05-2012 | | 47 | 22/2ಬಿ<br>22/3ಬಿ | ಖುಷ್ಕಿ | 1-05<br>1-20<br>0-01ಖ | 17-01-2012<br>07-05-2012 |

PD. 96
SC. 25

ವಿಶೇಷ ಭೂಸ್ವಾಧೀನಾಧಿಕಾರಿಗಳು,
ಕರ್ನಾಟಕ ಗೃಹ ಮಂಡಳಿ,ಬೆಂಗಳೂರು.

## ಗೃಹ ಆಯುಕ್ತರವರ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.

### ಭೂಸ್ವಾಧೀನ ಕಾಯ್ದೆ ಕಲಂ 16(2)ರ ತಿದ್ದುಪಡಿ ಅಧಿಸೂಚನೆ

### ಅಧಿಸೂಚನೆಯ ಕ್ರಮಾಂಕ: ಕಗೃಮಂ/ ಭೂಸ್ವಾವಿ/ 35/2006-07, ದಿ: 31-10-2014

ಭೂಸ್ವಾಧೀನ ಅಧಿನಿಯಮ 1894 ಸೆಕ್ಷನ್ 16(2)ರನ್ವಯ ಕ್ರಮ ಸಂ: ಕಗೃಮಂ/ ಭೂಸ್ವಾವಿ/ 35/2006-07 ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 17/1961ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಕರ್ನಾಟಕ ರಾಜ್ಯಪತ್ರದ ದಿನಾಂಕ: 27-02-2014ರ ಭಾಗ-3ರ ಸಂಪುಟ 149 ಸಂಚಿಕೆ-9ರ ಪುಟ ಸಂ: 685 ರಿಂದ 687 ರಲ್ಲಿನ ಅನುಸೂಚಿಯಲ್ಲಿ ಸೂಚಿಸಲಾದ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಪ್ರಕಟಿಸಿರುವುದು ಸರಿಯಷ್ಟೆ. ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ಈ ಕೆಳಕಂಡ ತಿದ್ದುಪಡಿಯನ್ನು ಮಾಡಿ ಪ್ರಕಟಣೆ ಹೊರಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ರಾಮನಗರ ತಾಲ್ಲೂಕು: ರಾಮನಗರ ಹೋಬಳಿ: ಬಿಡದಿ ಗ್ರಾಮ: ಬೋರೆಹಳ್ಳಿ**

| ಕಲಂ 16(2)ರಂತೆ ಪ್ರಕಟವಾಗಿರುವುದು | | | | | | ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು | | | | |
|---|---|---|---|---|---|---|---|---|---|---|
| ಕ್ರ. ಸಂ. | ಸ. ನಂ: | ತರಹೆ | ವಿಸ್ತೀರ್ಣ ಎ–ಗುಂ | ಮಂಡಳಿ ವಶಕ್ಕೆ ಪಡೆದುಕೊಂಡ ದಿನಾಂಕ | | ಕ್ರ. ಸಂ. | ಸ. ನಂ: | ತರಹೆ | ವಿಸ್ತೀರ್ಣ ಎ–ಗುಂ | ಮಂಡಳಿ ವಶಕ್ಕೆ ಪಡೆದುಕೊಂಡ ದಿನಾಂಕ |
| 20 | 25/5 | ಖುಷ್ಕಿ | 0–20 | 27–09–2013 | | 20 | 20/5 | ಖುಷ್ಕಿ | 0–20 | 27–09–2013 |

ವಿಶೇಷ ಭೂಸ್ವಾಧೀನಾಧಿಕಾರಿಗಳು,
ಕರ್ನಾಟಕ ಗೃಹ ಮಂಡಳಿ,
ಬೆಂಗಳೂರು.

**PD. 97**

**SC. 25**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ ಚಾಮರಾಜಪೇಟೆ, ಬೆಂಗಳೂರು – 18.**

**ದಾವಾ ಸಂಖ್ಯೆ: ಜೆಆರ್‌ಬಿ/ಡಿಐಎಸ್/167/1996–97**

| ವಾದಿ | ವಿರುದ್ಧ | ಪ್ರತಿವಾದಿ |
|---|---|---|
| **ಮುಖ್ಯಕಾರ್ಯನಿರ್ವಹಣಾಧಿಕಾರಿ,** ಬಿಬಿಆರ್ ಅಂಡ್ ಆರ್ ಡಿಸಿಸಿ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು – 560018 | | |

1. **ಕಾರ್ಯದರ್ಶಿ,** ಕೋನಾರ್ಕ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04

2. **ಶ್ರೀ ಡಾ: ಹೆಚ್.ಪಿ.ಶಾಂತಕುಮಾರ್** ಬಿನ್.ಹೆಚ್.ಕೆ.ಪುಟ್ಟಸ್ವಾಮಿ ಗೌಡ ಅಧ್ಯಕ್ಷರು, ಕೋನಾರ್ಕ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
3. **ಶ್ರೀ ಸುರೇಶ್** ಬಿನ್ ಶ್ರೀ ರಘು, ಕಾರ್ಯದರ್ಶಿ, ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
4. **ಶ್ರೀ ಅಜಿತ್ ಎಸ್ ಚಡಗರ್** ಬಿನ್ ಸತ್ಯರಾಜ್ ಚಡಗರ್, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
5. **ಶ್ರೀ ಬಿ.ಜೆ.ಸುರೇಶ್** ಬಿನ್ ಲೇಟ್ ಜವರೇಗೌಡ, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
6. **ಶ್ರೀಮತಿ ಕೆ.ವಿ.ಉಷಾ,** ಕೋಂ ಹೆಚ್. ಪಿ. ಶಾಂತಕುಮಾರ್, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
7. **ಶ್ರೀಮತಿ ಸಾವಿತ್ರಮ್ಮ,** ಕೋಂ ಲೇಟ್ ಕೆ.ವೀರಯ್ಯ, ನಿರ್ದೇಶಕರು, ಕಾರ್ಯದರ್ಶಿ, ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
8. **ಶ್ರೀ ದೇವಾನಂದ ಪೈ.ಕೆ,** ಬಿನ್ ಗೋಪಾಲ ರಾವ್ ಕೆ. ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
9. **ಶ್ರೀ ಉಲ್ಲಾಸ್ ಎಸ್,** ಬಿನ್ ಸತ್ಯರಾಜ್ ಚಡಗರ್, ನಿರ್ದೇಶಕರು, ಕಾರ್ಯದರ್ಶಿ, ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
10. **ಶ್ರೀ ನರಸಿಂಹಯ್ಯ,** ಬಿನ್ ಗಂಗಣ್ಣ, ನಿರ್ದೇಶಕರು, ಕಾರ್ಯದರ್ಶಿ, ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
11. **ಶ್ರೀಮತಿ ಹನುಮಕ್ಕ,** ಕೋಂ ನರಸಿಂಹಯ್ಯ, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
12. **ಶ್ರೀ ವಿ.ಎಸ್.ನಾಯ್ಕ** ಬಿನ್ ಹರಿಹರ ನಾಯ್ಕ, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
13. **ಶ್ರೀ ಕೆ.ಜನಾರ್ಧನ,** ಬಿನ್ ಲೇಟ್ ಕೃಷ್ಣಪ್ಪ, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04
14. **ಶ್ರೀ ಯು.ಸದಾಶಿವಶೆಟ್ಟಿ,** ಬಿನ್ ಸುಬ್ಬಣ್ಣ ಶೆಟ್ಟಿ, ನಿರ್ದೇಶಕರು, ಕಾರ್ಯದರ್ಶಿ ಕೋನಾರ್ಕ್ ಕ್ರೆಡಿಟ್ ಕೋ– ಆಪರೇಟಿವ್ ಸೊಸೈಟಿ ಲಿ., ನಂ.56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ ಬೆಂಗಳೂರು – 04

15. **ಶ್ರೀ ನಾರಾಯಣ ಗೌಡ,** ಮೇಜರ್, ಬಿನ್ ಪುಟ್ಟೇಗೌಡ, ಮಾಜಿ ಅಧ್ಯಕ್ಷರು ಹಾಗೂ ಈಗಿನ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಕೆರಳಾಲುಸಂದ್ರ, ಮಳಗಳು ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ.

16. **ಶ್ರೀ ಎಸ್.ಜಿ.ಚೆಲುವಯ್ಯ** ಮೇಜರ್, ಮಾಜಿ ಉಪಾಧ್ಯಕ್ಷರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೆಕೊಪ್ಪ, ಸೊಂಡೆಕೊಪ್ಪ ಪೋಸ್ಟ್, ನೆಲಮಂಗಲ ತಾ: ಬೆಂಗಳೂರು(ಗ್ರಾ) ಜಿಲ್ಲೆ

17. **ಶ್ರೀ ವಿ. ಚನ್ನಪ್ಪ** ಮೇಜರ್.

(ಮೃತಪಟ್ಟಿರುತ್ತಾರೆ) ಪ್ರತಿನಿಧಿಸುವವರು ಅವರ ವಾರಸುದರರು

17ಎ. **ಶ್ರೀಮತಿ ಜಯಮ್ಮ,** ವಯಸ್ಕಳು ಕೋಂ: ಲೇಟ್: ವಿ.ಚನ್ನಪ್ಪ.

17ಬಿ. **ಶ್ರೀ ಸಿ. ರಮೇಶ್,** ವಯಸ್ಕರು ಬಿನ್: ಲೇಟ್: ವಿ.ಚನ್ನಪ್ಪ.

17ಸಿ. **ಶ್ರೀ ಸಿ.ವೇಣುಗೋಪಾಲ್,** ವಯಸ್ಕರು ಬಿನ್: ಲೇಟ್: ವಿ.ಚನ್ನಪ್ಪ.

17ಡಿ. **ಶ್ರೀ ಸಿ. ಪ್ರಕಾಶ್,** ವಯಸ್ಕರು ಬಿನ್: ಲೇಟ್: ವಿ.ಚನ್ನಪ್ಪ.

ಪ್ರತಿವಾದಿ 17ಎ ರಿಂದ 17ಡಿ ರವರ **ವಿಳಾಸ:**

ನೆರಳಘಟ್ಟ ಗ್ರಾಮ, ಅಣಬೆ ಪೋಸ್ಟ್, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

17ಡಿ ರವರು ವಾದಿ ಬ್ಯಾಂಕಿನಲ್ಲಿ ನೌಕರರಾಗಿ ಹಾಲಿ ಕೆಲಸ ನಿರ್ವಹಿಸುತ್ತಿರುತ್ತಾರೆ

18. **ಶ್ರೀ ಎ.ನರಸಿಂಹಯ್ಯ,** ಮೇಜರ್, ಮಾಜಿ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಗಂಟಿಗಾನಹಳ್ಳಿ ಪೋಸ್ಟ್, ಕುರವೇಗೆರೆ,ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

19. **ಶ್ರೀ ಎನ್.ಎಸ್,ನರಸೇಗೌಡ,** ಮೇಜರ್, ಮಾಜಿ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ನಂ.692, 'ಎ' 8ನೇ ಮೇನ್, 3ನೇ ಸ್ಟೇಜ್, 3ನೇ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು – 79

20. **ಶ್ರೀ ಬಿ.ರಾಮಿರೆಡ್ಡಿ,** ಮೇಜರ್, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ನಂ.124, 'ಎ'ಪ್ಲೋರ್, 26ನೇ ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20

21. **ಶ್ರೀ ಕೆ.ಟಿ.ವೆಂಕಟಸ್ವಾಮಿ**, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು(ನಿವೃತ್ತ), ಕೇಂದ್ರ ಕಛೇರಿ ಶಾಖೆ. ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್‌ನಿ.,ನಂ.1013 ಇ, ಮೂಕಾಂಬಿಕ ಎ.ಆರ್. ಅವೆನ್ಯೂ, ನ್ಯೂ ತಿಪ್ಪಸಂದ್ರ, ಬೆಂಗಳೂರು–75

22. **ಶ್ರೀ ಎಂ. ನಾಗರಾಜ,** (ಅಂಡರ್ ಸಸ್‌ಪೆನ್‌ಷನ್) ಶಾಖಾ ವ್ಯವಸ್ಥಾಪಕರು, ಕೇಂದ್ರ ಕಛೇರಿ, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ದಿಡ್ಡಿಬಾಗಿಲು, ಮರಾಠ ಸ್ಟ್ರೀಟ್, ತ್ಯಾಗರಾಜ ರೋಡ್, ಆನೇಕಲ್ ಟೌನ್, ಬೆಂಗಳೂರು (ಗ್ರಾ) ಜಿಲ್ಲೆ.

23. **ಶ್ರೀ ಹೆಚ್.ಕೆ.ರಂಗರಾಜು,** (ಅಂಡರ್ ಸಸ್‌ಪೆನ್‌ಷನ್) ಶಾಖಾ ಸೂಪರ್‌ವೈಸರ್, ಕೇಂದ್ರ ಕಛೇರಿ, ಜೂನಿಯರ್ ಅಸಿಸ್ಟೆಂಟ್, ಬಿಬಿಆರ್ ಅಂಡ್ ಆರ್ ಡಿಸಿಸಿ ಬ್ಯಾಂಕ್ ನಿ., ನಂ.213, 1ನೇ ಕ್ರಾಸ್, ರೆಮ್ಕೋ ಲೇಔಟ್, ವಿಜಯನಗರ, ಬೆಂಗಳೂರು–40

24. **ಶ್ರೀ ರಾಮಕೃಷ್ಣ,** ಮೇಜರ್,

ಶಾಖಾ ವ್ಯವಸ್ಥಾಪಕರು(ಅಂಡರ್ ಸಸ್‌ಪೆನ್‌ಷನ್) ಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ & ಡೆವಲಪ್‌ಮೆಂಟ್ ಶಾಖೆ) ನಂ.221, 5ನೇ ಕ್ರಾಸ್, 1ನೇ ಮೇನ್, 1ನೇ ಹಂತ, ಕೆ.ಹೆಚ್.ಬಿ.ಕಾಲೋನಿ., ಬಸವೇಶ್ವರ ನಗರ, ಬೆಂಗಳೂರು–79

25. **ಶ್ರೀ ಹೆಚ್.ಬಿ.ಉಮೇಶ್,**

(ಪೌತಿ) ಅವರ ವಾರಸುದಾರರರು.

25.1ಎ **ಶ್ರೀಮತಿ ಹೆಚ್.ಎಸ್.ಹರಿಣಿ,** ಕೋಂ: ಲೇ: ಹೆಚ್.ಬಿ.ಉಮೇಶ್,

1ಬಿ. **ಶ್ರೀ ಕೀರ್ತಿ ಕಂದಾ**, ಬಿನ್: ಲೇಟ್: ಹೆಚ್.ಬಿ.ಉಮೇಶ್,

1ಸಿ. **ಶ್ರೀ ಚರಣ್,** ಬಿನ್: ಲೇ: ಹೆಚ್.ಬಿ.ಉಮೇಶ್,

**ವಿಳಾಸ:** ನಂ.112, ಐ.ಸಿ.ಎಸ್.ಸಿ. ಮೇನ್ ರೋಡ್, ನಾಗರಬಾವಿ, ಬೆಂಗಳೂರು–72.

26. **ಶ್ರೀ ಬಿ.ಮೃತ್ಯುಂಜಯ,**

(ಅಂಡರ್ ಸಸ್‌ಪೆನ್‌ಷನ್) ಸೀನಿಯರ್ ಅಸಿಸ್ಟೆಂಟ್, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ & ಡೆವಲಪ್‌ಮೆಂಟ್ ಶಾಖೆ), ನಂ.1087, 15ನೇ ಬಿ ಕ್ರಾಸ್, 2ನೇ ಹಂತ, ಯಲಹಂಕ ನ್ಯೂ ಟೌನ್, ಬೆಂಗಳೂರು–64

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಪ್ರತಿವಾದಿ 26 ರವರ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಮುನ್ನ ಜಪ್ತಿ ನೋಟೀಸನ್ನು ಸ್ಥಿರೀಕರಿಸಿರುವ ಆದೇಶ"**

**ಪ್ರಸ್ತಾವನೆ:–**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 26ನೇ ಪ್ರತಿವಾದಿಗಳಿಂದ ರೂ.4,39,26,119/– (ರೂ. ನಾಲ್ಕು ಕೋಟಿ ಮೂವತ್ತೊಂಬತ್ತು ಲಕ್ಷದ ಇಪ್ಪತ್ತಾರು ಸಾವಿರದ ಒಂದು ನೂರ ಹತ್ತೊಂಬತ್ತು ರೂಪಾಯಿಗಳು ಮಾತ್ರ) ಗಳು ಹಾಗೂ ಈ ಮೊತ್ತಕ್ಕೆ ದಿನಾಂಕ: 24–05–1996 ರಿಂದ ಸಾಲಿಯಾನ ಶೇ.22.5%ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು, ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣವು ವಿಚಾರಣಾ ಹಂತದಲ್ಲಿ ವಾದಿಯು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 26ನೇ ಪ್ರತಿವಾದಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುವುದನ್ನು ಪುರಸ್ಕರಿಸಿ ದಿನಾಂಕ 02–12–2013 ರಂದು ಷರತ್ತುಬದ್ದ ಆದೇಶ ಪೂರ್ವ ಜಪ್ತಿ ನೋಟೀಸನ್ನು ನೀಡಿ ಆದೇಶ ಹೊರಡಿಸಿದ 30 ದಿವಸದ ಒಳಗಾಗಿ ಕ್ಲೇಮ್ ಮೊತ್ತವನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಪಾವತಿ ಮಾಡಿ ಅಧಿಕೃತ ರಶೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದಲ್ಲಿ ಆದೇಶಪೂರ್ವ ಜಪ್ತಿ ಆದೇಶದಿಂದ ಮುಕ್ತಗೊಳಿಸಲಾಗುವುದೆಂದು ತಿಳಿಸಲಾಗಿತ್ತು. ಈ ರೀತಿ ನೀಡಿದ ಕಲಂ 103ರ ಅಡಿಯಲ್ಲಿ ಜಪ್ತಿ ಪೂರ್ವ ಷರತ್ತುಬದ್ದ ಆದೇಶ ನೋಟಿಸ್‌ನ್ನು ಪ್ರತಿವಾದಿ 26 ರವರಿಗೆ ಜಾರಿ ಮಾಡಲಾಗಿತ್ತು. 26ನೇ ಪ್ರತಿವಾದಿ ತಮ್ಮ ವಕೀಲರ ಮೂಲಕ ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ. ತಮ್ಮ ಆಕ್ಷೇಪಣೆಗಳಲ್ಲಿ 15 ವರ್ಷದ ನಂತರ ಜಪ್ತಿ ಪೂರ್ವ ಆದೇಶವನ್ನು ಸಲ್ಲಿಸಿದ್ದು, 26ನೇ ಪ್ರತಿವಾದಿ ಕಲಂ 68ರ ಆದೇಶವನ್ನು ಮಾನ್ಯ ಅಪರ ನಿಬಂಧಕರ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಿದ್ದು, ಸದರಿ ಮೇಲ್ಮನವಿ ಪ್ರಾಧಿಕಾರವು ಕಲಂ 68ರ ಆದೇಶವನ್ನು ಪ್ರತಿವಾದಿ 26ಕ್ಕೆ ಸಂಬಂಧಿಸಿದಂತೆ ಪುರಸ್ಕರಿಸಿರುವುದರಿಂದ 26ನೇ ಪ್ರತಿವಾದಿಯನ್ನು ದಾವೆಯಿಂದ ಕೈಬಿಡುವಂತೆಯೂ ಹಾಗೂ ಜಪ್ತಿ ಆದೇಶವನ್ನು ಮಾಡಬಾರದೆಂದು ಪ್ರತಿಪಾದಿಸಿರುತ್ತಾರೆ. 26ನೇ ಪ್ರತಿವಾದಿಯು ಹಾಜರುಪಡಿಸಿದ ಮೇಲ್ಮನವಿ ಪ್ರಾಧಿಕಾರದ ಆದೇಶವನ್ನು ಪರಿಶೀಲಿಸಲಾಗಿ ಸದರಿ ಆದೇಶದಲ್ಲಿ ಅವಶ್ಯಕತೆಯಿದ್ದಲ್ಲಿ ಮತ್ತೊಂದು ವಿಚಾರಣೆ ನಡೆಸಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ ಹಾಗೂ ಪ್ರತಿವಾದಿ 26 ಈ ಮೇಲಿನ ಪ್ರಕರಣದಿಂದ ಕೈಬಿಡುವಂತೆ ಸಲ್ಲಿಸಿರುವ ಮೆಮೋವನ್ನು ಈ ನ್ಯಾಯಾಲಯವು ಈಗಾಗಲೇ ತಿರಸ್ಕರಿಸಿ ಪ್ರತಿವಾದಿಯು 26 ಈ ಪ್ರಕರಣಕ್ಕೆ ಅವಶ್ಯಕ ಪಕ್ಷಗಾರನೆಂದು ತೀರ್ಪನ್ನು ನೀಡಲಾಗಿರುತ್ತದೆ. ಆದರೂ ಸಹ ಷರತ್ತುಬದ್ದ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ.

2. 26ನೇ ಪ್ರತಿವಾದಿ ಬ್ಯಾಂಕಿನ ನೌಕರನಾಗಿದ್ದು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈಗಾಗಲೇ ಮಾನ್ಯ ಸಿ.ಬಿ.ಐ. ನ್ಯಾಯಾಲಯದಲ್ಲಿ 26ನೇ ಪ್ರತಿವಾದಿ ವಿರುದ್ದ ಆರೋಪಗಳಿದ್ದು ಆರೋಪ ಪಟ್ಟಿಯನ್ನು ಸಲ್ಲಿಸಿರುವುದಾಗೀ ದಾವಾ ಅರ್ಜಿ ಕ್ಲೇಮ್‌ಗೆ 26ನೇ ಪ್ರತಿವಾದಿ ನೇರವಾಗಿ ಮತ್ತು ಪರೋಕ್ಷವಾಗಿ ಜವಾಬ್ದಾರರಾಗಿದ್ದು ಸದ್ಯಕ್ಕೆ ಪ್ರತಿವಾದಿ–26 ಬ್ಯಾಂಕಿನ ಕೆಲಸದಿಂದ ನಿವೃತ್ತಿ ಹೊಂದಿರುವುದಾಗಿ ಪ್ರಮಾಣ ಪತ್ರದಲ್ಲಿ ತಿಳಿಸಿ ಜೊತೆಗೆ 26ನೇ ಪ್ರತಿವಾದಿ ಹೆಸರಿನಲ್ಲಿರುವ ಕ್ರಯಪತ್ರ, ಋಣಭಾರ ರಾಹಿತ್ಯ ಪತ್ರವನ್ನು ಸಹ ಹಾಜರುಪಡಿಸಿರುತ್ತಾರೆ. ಅವುಗಳನ್ನು ಪರಿಶೀಲಿಸಿ ಷರತ್ತುಬದ್ದ ತಿಳುವಳಿಕೆ ನೋಟೀಸನ್ನು ನೀಡಲಾಗಿತ್ತು. ಕಲಂ 103 ಅರ್ಜಿಯನ್ನು ಪರಿಗಣಿಸದೇ ಇದ್ದ ಪಕ್ಷದಲ್ಲಿ ಈ ಪ್ರಕರಣದಲ್ಲಿ ಅಂತಿಮ ಆದೇಶ ಹೊರಡಿಸಿದಾಗ್ಯೂ 26ನೇ ಪ್ರತಿವಾದಿ ವಿರುದ್ದ ಕ್ಲೇಂ ಮೊತ್ತ ಸಾಬೀತಾದಲ್ಲಿ ಆ ಮೊತ್ತವನ್ನು ವಸೂಲಿ ಮಾಡುವುದು ಕಷ್ಟ ಸಾಧ್ಯವಾಗುವುದೆಂಬುದನ್ನು ಮನಗಂಡು 26ನೇ ಪ್ರತಿವಾದಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶಕ್ಕೆ ಪೂರ್ವ ಜಪ್ತಿ ಮಾಡುವುದು ಸೂಕ್ತ ಎಂಬ ಅಭಿಪ್ರಾಯಕ್ಕೆ ಬಂದು ಷರತ್ತುಬದ್ದ ಆದೇಶವನ್ನು ಹೊರಡಿಸಲಾಗಿತ್ತು ಆದರೆ 26ನೇ ಪ್ರತಿವಾದಿ ಷರತ್ತುಬದ್ದ ಆದೇಶದಲ್ಲಿ ತಿಳಿಸಿರುವ ಷರತ್ತುಗಳನ್ನು ಪೂರೈಸದ ಕಾರಣ ಹಾಗೂ ಪೂರೈಸಿದ ಬಗ್ಗೆ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ ಕಾರಣ 26ನೇ ಪ್ರತಿವಾದಿಗೆ ಸೇರಿದ ಸ್ತಿರಾಸ್ಥಿಯನ್ನು ದಿನಾಂಕ 02–12–2013ರಂದು ಆದೇಶ ಪೂರ್ವ ಜಪ್ತಿ ಮಾಡಿ ಹೊರಡಿಸಲಾಗಿದ್ದ ಷರತ್ತುಬದ್ದ ಆದೇಶವನ್ನು ಸ್ಥಿರೀಕರಿಸುವುದು ಸೂಕ್ತ ಮತ್ತು ಅಗತ್ಯವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಈ ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಂಎಲ್/2010 ದಿನಾಂಕ:17–02–2011ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ.ಸತೀಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 26ನೇ ಪ್ರತಿವಾದಿ ರವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸಿಯನ್ನು ಈ ಪ್ರಕರಣದ ಅಂತಿಮ ತೀರ್ಪಿಗೆ ಒಳಪಟ್ಟು ದಿನಾಂಕ 02–12–2013 ರಂದು ಆದೇಶ ಪೂರ್ವ ಜಪ್ತಿ ಮಾಡಿ ಹೊರಡಿಸಲಾಗಿದ್ದ ಷರತ್ತುಬದ್ದ ಆದೇಶವನ್ನು ಸ್ಥಿರೀಕರಿಸಿರುತ್ತೇನೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

All that piece and parcel of the property bearing **No. 1087 LIG** measuring east to west **30ft** and north to south **36½ft,** situated at 2nd Stage, Yelahanka satellite Town, Bangalore City with built up area thereon and Bounded

| | |
|---|---|
| East by | : Property bearing No. 1088 |
| West by | : Property bearing No. 1086 |
| North by | : EWS house |
| South by | : Road. |

ಈ ಆದೇಶವು ಪ್ರತಿವಾದಿ 26 ರವರ ಹಕ್ಕು ಮತ್ತು ಬಾಧ್ಯತೆಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ: 27.10.2014 ರಂದು ಹೊರಡಿಸಿರುತ್ತೇನೆ.

**ಬಿ.ಸಿ.ಸತೀಶ್,**

ಸಹಕಾರ ಸಂಘಗಳ ಜಂಟಿ ನಿಬಂಧಕರು,

ಬೆಂಗಳೂರು ಪ್ರಾಂತ, ಬೆಂಗಳೂರು.

**PR. 818**

**SC. 10**

**ಜಿಲ್ಲಾಧಿಕಾರಿಯವರ ಕಾರ್ಯಾಲಯ ರಜತಾದ್ರಿ ಮಣಿಪಾಲ ಉಡುಪಿ 576104**

**ಅಧಿಸೂಚನೆ 01/14-15**

**ಸಂ:ಗಭೂಇ/ಹಿಭೂ(ಉಡುಪಿ)/ಮರಳು ಅಧಿಸೂಚನೆ-01/14-15/ ದಿನಾಂಕ 21-10-2014**

**ವಿಷಯ:** ಉಡುಪಿ ಜಿಲ್ಲೆಯಲ್ಲಿ ಗುರುತಿಸಲಾಗಿರುವ ಸಾಮಾನ್ಯ ಮರಳು ಬ್ಲಾಕ್‌ಗಳಿಗೆ ಅಧಿಸೂಚನೆ ಜಾರಿ ಮಾಡುವ ಕುರಿತು.

**ಉಲ್ಲೇಖ:** ದಿನಾಂಕ 26-08-2014 ರಂದು ಜರುಗಿದ ಜಿಲ್ಲಾ ಮರಳು ಉಸ್ತುವಾರಿ ನಿಯಂತ್ರಣ ಸಮಿತಿ ಸಭೆಯ ನಡಾವಳಿ.

ಘನ ಸರ್ಕಾರದ ಸರ್ಕಾರಿ ಆದೇಶ ಸಂಖ್ಯೆ: ಸಿಐ 357 ಎಂಎಂಎನ್ 2012, ದಿನಾಂಕ 16-12-2013 ಹಾಗೂ ಕರ್ನಾಟಕ ಉಪ ಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿಗಳು 1994 ರನ್ವಯ, ಉಡುಪಿ ಜಿಲ್ಲೆ ವ್ಯಾಪ್ತಿಯಲ್ಲಿ 11 ಮರಳು ಬ್ಲಾಕ್‌ಗಳನ್ನು ನಿಯಮ 31 ಆರ್(1-ಸಿ) (iv) ರಂತೆ, ಜಂಟಿ ಸ್ಥಳ ತನಿಖೆ ಮಾಡಿ ಗುರುತಿಸಲಾಗಿದ್ದು, ತಾಲ್ಲೂಕು ಮರಳು ಉಸ್ತುವಾರಿ ಸಮಿತಿಯ ಶಿಫಾರಸ್ಸಿನಂತೆ ನಿಯಮ 31 ಆರ್ (1-ಬಿ) (ii) ರಂತೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ನಿಯಮ 31 ಆರ್ (1-ಬಿ) (v) ಲೋಕೋಪಯೋಗಿ, ಬಂದರು ಮತ್ತು ಒಳಜಲಸಾರಿಗೆ ಇಲಾಖೆ, ಉಡುಪಿ ಇವರ ಮೂಲಕ ನಿಯಮಾನುಸಾರ ಮರಳು ವಿತರಿಸಲು, ಕೆಳಕಂಡ 11 ಸಾಮಾನ್ಯ ಮರಳು ಬ್ಲಾಕ್‌ಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಅಧಿಸೂಚನೆ ಜಾರಿ ಮಾಡಲಾಗಿದೆ.

| ಕ್ರ. ಸಂ. | ನದಿ | ಬ್ಲಾಕ್ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) | ಗ್ರಾಮ | ಸಾಮಾನ್ಯ ಮರಳು ಬ್ಲಾಕ್ ಚೆಕ್ಕುಬಂದಿ |
|---|---|---|---|---|---|---|
| **ಕುಂದಾಪುರ ತಾಲ್ಲೂಕು** | | | | | | |
| 1 | ವರಾಹಿ | 1 | 239 | 24.00 | ಬಸ್ರೂರು | ಉತ್ತರ: ಸರ್ವೆ ನಂ. 239 ನದಿ ಪ್ರದೇಶ<br>ದಕ್ಷಿಣ: ಸರ್ವೆ ನಂ. 239 ನದಿ ಪ್ರದೇಶ<br>ಪೂರ್ವ: ಸರ್ವೆ ನಂ. 239 ನದಿ ಪ್ರದೇಶ<br>ಪಶ್ಚಿಮ: ಸರ್ವೆ ನಂ. 239 ನದಿ ಪ್ರದೇಶ |
| 2 | ವರಾಹಿ | 2 | ಹಳ್ನಾಡು 56<br>ಜಪ್ತಿ-174 | 12.50 | ಹಳ್ನಾಡು<br>ಜಪ್ತಿ | ಉತ್ತರ: ಸರ್ವೆ ನಂ. 56 (ಹಳ್ನಾಡು) ನದಿ ಪ್ರದೇಶ<br>ದಕ್ಷಿಣ: ಸರ್ವೆ ನಂ. 174 (ಜಪ್ತಿ) ನದಿ ಪ್ರದೇಶ<br>ಪೂರ್ವ: ಸರ್ವೆ ನಂ. 56(ಹಳ್ನಾಡು) ನದಿ ಪ್ರದೇಶ<br>& ಸರ್ವೆ ನಂ. 174 (ಜಪ್ತಿ) ನದಿ ಪ್ರದೇಶ<br>ಪಶ್ಚಿಮ: ಸರ್ವೆ ನಂ. 56 (ಹಳ್ನಾಡು) ನದಿ ಪ್ರದೇಶ<br>& ಸರ್ವೆ ನಂ. 174 (ಜಪ್ತಿ) ನದಿ ಪ್ರದೇಶ |
| 3 | ವರಾಹಿ | 3 | ಅಂಪಾರು-1<br>ಮೊಳಹಳ್ಳಿ-249 | 12.50 | ಅಂಪಾರು<br>ಮೊಳಹಳ್ಳಿ | ಉತ್ತರ: ಸರ್ವೆ ನಂ. 1 (ಅಂಪಾರು) ವರಾಹಿ ನದಿ<br>ದಕ್ಷಿಣ: ಸರ್ವೆ ನಂ. 249 (ಮೊಳಹಳ್ಳಿ) ವರಾಹಿ ನದಿ<br>ಪೂರ್ವ: ಸರ್ವೆ ನಂ. 1 (ಅಂಪಾರು) ವರಾಹಿ ನದಿ<br>& ಸರ್ವೆ ನಂ. 249 (ಮೊಳಹಳ್ಳಿ) ವರಾಹಿ ನದಿ<br>ಪಶ್ಚಿಮ: ಸರ್ವೆ ನಂ. 1 (ಅಂಪಾರು) ವರಾಹಿ ನದಿ<br>& ಸರ್ವೆ ನಂ. 249 (ಮೊಳಹಳ್ಳಿ) ವರಾಹಿ ನದಿ |
| 4 | ವರಾಹಿ | 4 | 253 | 12.50 | ಮೊಳಹಳ್ಳಿ | ಉತ್ತರ: ಸರ್ವೆ ನಂ. 253 ವರಾಹಿ ನದಿ<br>ದಕ್ಷಿಣ: ಸರ್ವೆ ನಂ. 253 ವರಾಹಿ ನದಿ<br>ಪೂರ್ವ: ಸರ್ವೆ ನಂ. 253 ವರಾಹಿ ನದಿ<br>ಪಶ್ಚಿಮ: ಸರ್ವೆ ನಂ. 253 ವರಾಹಿ ನದಿ |
| **ಉಡುಪಿ ತಾಲ್ಲೂಕು** | | | | | | |
| 5 | ಶಾಂಭವಿ | 5 | 285<br>370 | 8.75 | ಶಿರ್ವ | ಉತ್ತರ: ಸರ್ವೆ ನಂ. 285 & 370 ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 285 & 370 ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 370 ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 285 ಶಾಂಭವಿ ನದಿ |
| 6 | ಸುವರ್ಣ | 6 | 31 | 10.20 | ಆರೂರು | ಉತ್ತರ: ಸರ್ವೆ ನಂ. 31 ಸುವರ್ಣ ನದಿ<br>ದಕ್ಷಿಣ: ಸರ್ವೆ ನಂ. 31 ಸುವರ್ಣ ನದಿ<br>ಪೂರ್ವ: ಸರ್ವೆ ನಂ. 31 ಸುವರ್ಣ ನದಿ<br>ಪಶ್ಚಿಮ: ಸರ್ವೆ ನಂ. 31 ಸುವರ್ಣ ನದಿ |

| ಕ್ರ. ಸಂ. | ನದಿ | ಬ್ಲಾಕ್ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) | ಗ್ರಾಮ | ಸಾಮಾನ್ಯ ಮರಳು ಬ್ಲಾಕ್ ಚೆಕ್ಕುಬಂದಿ |
|---|---|---|---|---|---|---|
| ಕಾರ್ಕಳ ತಾಲ್ಲೂಕು | | | | | | |
| 7 | ಶಾಂಭವಿ | 7 | 209 | 12.50 | ಮುಂಡ್ಕೂರು | ಉತ್ತರ: ಸರ್ವೆ ನಂ. 209–ಎ,ಬಿ,ಸಿ ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 209–ಎ,ಬಿ,ಸಿ ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 209–ಸಿ ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 209–ಎ ಶಾಂಭವಿ ನದಿ |
| 8 | ಶಾಂಭವಿ | 8 | 209 | 12.50 | ಮುಂಡ್ಕೂರು | ಉತ್ತರ: ಸರ್ವೆ ನಂ. 209–ಜಿ ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 209–ಜಿ ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 209–ಜಿ ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 209–ಜಿ ಶಾಂಭವಿ ನದಿ |
| 9 | ಶಾಂಭವಿ | 9 | 209 | 13.00 | ಮುಂಡ್ಕೂರು | ಉತ್ತರ: ಸರ್ವೆ ನಂ. 209–ಎನ್ ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 209–ಎಂ ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 209–ಎಂಎನ್ ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 209– ಎಂಎನ್ ಶಾಂಭವಿ ನದಿ |
| 10 | ಶಾಂಭವಿ | 10 | 209 | 10.00 | ಮುಂಡ್ಕೂರು | ಉತ್ತರ: ಸರ್ವೆ ನಂ. 209–ಐ,ಜೆ ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 209–ಐ,ಜೆ ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 209–ಜೆ ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 209–ಐ ಶಾಂಭವಿ ನದಿ |
| 11 | ಶಾಂಭವಿ | 11 | 47 | 12.50 | ಇನ್ನಾ | ಉತ್ತರ: ಸರ್ವೆ ನಂ. 47–ಬಿ, ಸಿ ಶಾಂಭವಿ ನದಿ<br>ದಕ್ಷಿಣ: ಸರ್ವೆ ನಂ. 47–ಬಿ, ಸಿ ಶಾಂಭವಿ ನದಿ<br>ಪೂರ್ವ: ಸರ್ವೆ ನಂ. 47–ಬಿ ಶಾಂಭವಿ ನದಿ<br>ಪಶ್ಚಿಮ: ಸರ್ವೆ ನಂ. 47–ಸಿ ಶಾಂಭವಿ ನದಿ |

**PR. 769**
**SC. 05**

ಜಿಲ್ಲಾಧಿಕಾರಿ/ಅಧ್ಯಕ್ಷರು
ಜಿಲ್ಲಾ ಮರಳು ಉಸ್ತುವಾರಿ ನಿಯಂತ್ರಣ ಸಮಿತಿ
ಉಡುಪಿ ಜಿಲ್ಲೆ

## OFFICE THE OF KARNATAKA STATE LEGAL SERVICES AUTHORITY,

### "NYAYA DEGULA", 1ST FLOOR, H. SIDDIAH ROAD, BANGALORE-560-027.

### NOTIFICATION

### No. KSLSA/165/ADMN/2014, Bangalore.

**CALLING FOR APPLICATION FOR POST OF CHAIRMAN, PERMANENT LOK ADALAT AT MANGALORE.**

**LAST DATE FOR RECEIPT OF APPLICATIONS: 9TH DECEMBER 2014.**

Karnataka State Legal Services Authority issued notification dated 29th January 2007 under Sec. 22B of Legal Services Authorities Act, 1987 and Legal Services Authorities (Amendment) Act, 2002, establishing Permanent Lok Adalats in respect of the following public utility services, viz.,

i) transport service for carriage of passengers or goods by air, road or water;or

ii) postal, telegraph or telephone service; or

iii) supply or power, light or water to the public by any establishment; or

iv) system of public conservancy or sanction; or

v) service in hospital or dispensary; or

vi) insurance service ; or

vii) banking and financial institutions;

viii) any service which the Central Government or the State Government, as the case may be, in public interest, by Notification declare to be a public utility service for the purpose of Chapter VIA of the Legal Services Authorities Act, 1987 at **Mangalore** for exercising jurisdiction over the Revenue Districts of Dakshina Kannada, Udupi, Chikkamagalur and Shimoga Districts.

Applications in the prescribed format appended hereto are invited from the persons willing to be appointed as Chairman of Permanent Lok Adalat at the above place.

(I) **Qualifications for the Post of Chairman of Permanent Lok Adalat:** Every Permanent Lok Adalat established for an area notified under sub section (I) of Section 22B of Legal Services Authorities Act, 1987, shall consist of a person who is, or has been, a District Judge or Additional District Judge or has held Judicial Office higher in rank than that of a District Judge who shall be the Chairman of the Permanent Lok Adalat.

(II) **Sitting Fee and other Allowance of Chairman of Permanent Lok Adalat:**

**(1)** When a serving Judicial Officer is appointed as Chairman, he shall receive the salary, allowances and other perquisites as are admissible to a serving Judicial officer.

**(2)** When a retired Judicial Officer is appointed as Chairman he shall be entitled to monthly fee of last drawn salary less the amount of pension received by him.

**(3)** The Chairman shall be entitled to such travelling and daily allowances on official tour as are admissible to Group 'A' officers of the Central Government.

**(4)** For the purpose of attending the sitting of Permanent Lok Adalat, the Chairman shall be entitled to conveyance allowance of Rs.3000/-per month.

(III) **Terms and Conditions of service of Chairman of Permanent Lok Adalat:**

**(1)** Before appointment, the Chairman shall have to take an undertaking that he does not and will not have any such financial or other interest as is likely to affect prejudicially his functions, as such, as Chairman of PLA.

**(2)** The Chairman shall hold office for a term of five years and shall not be eligible for re-appointment.

**(3)** Notwithstanding anything contained in sub-rule (2) of Rule 4 of PLA (Other Terms & Conditions of Appointment of Chairman & Other Persons) Rules, 2003, Chairman may-

(a) by writing under his hand and addressed to Karnataka State Legal Services Authority, Bangalore, resign his office at any time;

(b) be removed from his office in accordance with the provisions of sub clause 5 of Rule 4 of the above Rules.

Karnataka State Legal Services Authority may remove a Chairman of PLA who-

(a) has been adjudged as insolvent; or

(b) has been convicted of an offence which, in the opinion of the Authority, involves moral turpitude; or

(c) has become physically or mentally incapable of acting as such as a member ; or

(d) has acquired such financial or other interest as is likely to affect prejudicially his functions as a member of PLA; or

(e) has or so abused his position as to render his continuance in office prejudicial to the public interest;

Provided that a Chairman of PLA shall not be removed from his office on the ground specified in clause (d) & € of sub rule 5 of Rule 4 of the above Rules, except, on enquiry held in accordance with the procedure prescribed in Rule 6 of the above Rules.

**Note:- The Person appointed as Chairman, Permanent Lok Adalat, Mangalore shall have to conduct sittings at Mysore or any other Permanent Lok Adalat, also as per directions of the Hon'ble Executive Chairman, Karnataka State Legal Services Authority, as and when required.**

**(4)** When the Chairman of PLA is unable to discharge his functions owing to absence, illness, or any other cause, the senior-most (in the order of appointment) member of Permanent Lok Adalat holding office for the time being, shall discharge the functions of the Chairman until the day on which the Chairman resumes of charge of his functions.

**(5)** The Chairman of PLA ceasing to hold office, as such, shall not hold any appointment in, or be connected with, the management or administration of organization which has been the subject of the proceedings under the Act during his tenure, for a period of five years from the date on which he ceases to hold such office.

The applications complete in all respects accompanied by self attested copies of relevant academic records, testimonials etc., shall reach the **Member Secretary, Karnataka State Legal Services Authority, "NyayaDegula", 1st Floor, H. Siddaiah Road, Bangalore – 560 027,** on or before 4.00 pm of **9th December 2014.**

Applications sent through post shall be superscribed as **"APPLICATION FOR APPOINTMENT AS CHAIRMAN OF PLA".**

Applications received beyond the date so fixed will be rejected.

In service persons shall submit their application **through proper channel** so as to reach the Member Secretary, Karnataka State Legal Services Authority, Bangalore, **not later than the date fixed for receipt of applications.**

If the last date fixed for receipt of the applications happens to be a General Holiday, the next working day shall be the last date for receipt of applications.

BY ORDER

**ASHOK G. NIJAGANNAVAR**

Member Secretary

**FORM OF APPLICATION**

**To**

Member Secretary,

Karnataka State Legal Services Authority,

" Nyaya Degula", 1st Floor,

H.Siddaiah Road, **Bangalore- 560 027.**

Affix Photo here

| | | |
|---|---|---|
| **1.** | Name of the applicant in full (in block letters) | |
| **2.** | Name of his/her Father/Husband | |
| **3.** | Sex | |
| **4.** | Age and Date of Birth | |
| **5.** | Qualification/s | |
| **6.** | Postal Address( in block letters)<br>(a) Permanent Postal Address<br>(b) Present Postal Address<br>(c) Contact Numbers: (Mobile and Land Line) | |
| **7.** | Whether the applicant is presently employed? If so, furnish the details of employment and monthly income | |
| **8.** | If retired, particulars of last post held and last drawn Salary and other information if any. | |
| **9.** | Whether the applicant is/was a party to any criminal proceedings. If yes, furnish the details. | |
| **10.** | Details of experience in public utility services. | |
| **11** | Any other information | |

I do hereby solemnly and sincerely affirm that the statement made and the information furnished above are true. Should it however be found that any information furnished herein is untrue in material particulars, I realize that I am liable to criminal prosecution. I am also agreeable to forego the claim for public services under the State Government.

**PLACE:**

DATE: **SIGNATURE OF THE CANDIDATE.**

**PD. 104**
**SC. 5**

**ASHOK G. NIJAGANNAVAR**
Member Secretary

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**(ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)**

**ಹೆಚ್ಚುವರಿ ಅಧಿಸೂಚನೆ**

**ಸಂಖ್ಯೆ: ಲೋಇ : 31: ಇಎಪಿ:2010 (ಪಿ1) ಬೆಂಗಳೂರು, ದಿನಾಂಕ: 21–10–2014**

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಮೇರೆಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 34 (ಲಿಂಕ್ ಸಂಖ್ಯೆ 21 ಬಿ ಧಾರವಾಡ – ಸವದತ್ತಿ ) ರಸ್ತೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 34 ನ್ನು ಅಭಿವೃದ್ಧಿಪಡಿಸಲು ಅವಶ್ಯವಾಗಿದೆ ಎಂದು ಸರ್ಕಾರವು ಮನಗಂಡಿದೆ. ಆದುದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 34ರ ರಸ್ತೆ ಅಭಿವೃದ್ಧಿಗೆ ಅವಶ್ಯಕವಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ. ಕರ್ನಾಟಕ ಹೆದ್ದಾರಿ ಕಾಯ್ದೆ 1964ರ ಅಡಿಯಲ್ಲಿ ಈ ಕೆಳಕಂಡ ಜಮೀನುಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ, ಸಿಬ್ಬಂದಿ ಅಥವಾ ಯೋಜನಾ ನಿರ್ದೇಶಕರ ಪರವಾಗಿ ಪ್ರತಿನಿಧಿಸುವವರನ್ನು ತಡೆಯುವುದಾಗಲಿ ಅಥವಾ ಅಡ್ಡಿಪಡಿಸುವುದಾಗಲಿ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ಹೆಚ್ಚುವರಿ ಅಧಿಸೂಚನೆ ಪ್ರಕಟಣೆಯಾದ ನಂತರ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೆ ಮಾಡುವ ಒಪ್ಪಂದದ ಕ್ರಯ, ಕರಾರು, ಬೋಗ್ಯ, ಲೀಜ್, ಅದಲು–ಬದಲು ವಗೈರೆ ಮಾಡುವಂತಿಲ್ಲ. ಸದರಿ ಜಮೀನುಗಳಲ್ಲಿ ಈ ಹೆಚ್ಚುವರಿ ಅಧಿಸೂಚನೆ ಪ್ರಕಟಣೆಯ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ ಪರಿಹಾರ ಹಣ ನಿಗದಿ ಮಾಡುವಾಗ ಅಂತಹ ವ್ಯವಹಾರದ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಸದರಿ ಜಮೀನುಗಳ ವಿವರಗಳನ್ನು ಪರಿಶೀಲನೆಗಾಗಿ ವಿಶೇಷ ಜಿಲ್ಲಾಧಿಕಾರಿಗಳು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು, ಸಹಾಯಕ ಆಯುಕ್ತರು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಉಪವಿಭಾಗ–2 ಬೆಳಗಾವಿ ಮತ್ತು ಸಂಬಂಧಪಟ್ಟ ತಹಸೀಲ್ದಾರ್‌ರವರ ಕಛೇರಿಯಲ್ಲಿ ಇಡಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**–: ಷೆಡ್ಯೂಲ್ :–**

**ಗ್ರಾಮ:** ಇನಾಂಹೊಂಗಲ **ಹೋಬಳಿ:** ಸವದತ್ತಿ **ತಾಲ್ಲೂಕು:** ಸವದತ್ತಿ **ಜಿಲ್ಲೆ:** ಬೆಳಗಾವಿ

| ಕ್ರ ಸಂ | ಪಹಣಿಯಂತೆ ಖಾತೆದಾರರ ಹೆಸರು ಶ್ರೀಯುತರು/ಶ್ರೀಮತಿ | ಆಕಾರ ಬಂದಿನಂತೆ ಜಮೀನಿನ ವಿವರ | | | | | ಆಕಾರ | ಭೂಸ್ವಾಧೀನಕ್ಕೆ ಒಳಪಡುವ ವಿಸ್ತೀರ್ಣ | | | ಆಕಾರ | ಚಕ್ಕುಬಂದಿ | | | | ಪಹಣಿ ಯಂತೆ ಒಟ್ಟು ವಿಸ್ತೀರ್ಣ ಎ–ಗುಂ |
|---|---|---|---|---|---|---|---|---|---|---|---|---|---|---|---|---|
| | | ಸ. ನಂ. | ತರಹೆ | ಒಟ್ಟು ವಿಸ್ತೀರ್ಣ ಎ–ಗುಂ | ಖರಾಬು ಎ–ಗುಂ | ಉಳಿಕೆ ಎ–ಗುಂ | | ಐನು ಎ–ಗುಂ | ಖರಾಬು ಎ–ಗುಂ | ಒಟ್ಟು ಎ–ಗುಂ | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| **1** | **2** | **3** | **4** | **5** | **6** | **7** | **8** | **9** | | | **10** | **11** | **12** | **13** | **14** | **15** |
| 1 | ತುರಮರಿ ರುದ್ರಪ್ಪ ಶಿದ್ದಪ್ಪ<br>ತುರಮರಿ ಬಸಪ್ಪ ಶಿದ್ದಪ್ಪ<br>ತುರಮರಿ ಸೋಮಲಿಂಗಪ್ಪ ಶಿದ್ದಪ್ಪ | 14 | ಖುಷ್ಕಿ | 0–31 | – | 0–31 | 1–22 | 0–05 | – | 0–05 | 0–20 | ರಸ್ತೆ | 14 ರ ಉಳಿದ ಭಾಗ | ಸ.ನಂ7 | ಹಳ್ಳ | 0–31 |

**ಗ್ರಾಮ:** ಸವದತ್ತಿ **ಹೋಬಳಿ:** ಸವದತ್ತಿ **ತಾಲ್ಲೂಕು:** ಸವದತ್ತಿ **ಜಿಲ್ಲೆ:** ಬೆಳಗಾವಿ

| | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| 2 | ಪಟ್ಟಣಶೆಟ್ಟಿ ರಮೇಶ ಮಲ್ಲಪ್ಪ | 37 | ಖುಷ್ಕಿ | 2–01 | – | 2–01 | – | 0–01 | – | 0–01 | – | 37 ರ ಉಳಿದ ಭಾಗ | ರಸ್ತೆ | ರಸ್ತೆ | 37 ರ ಉಳಿದ ಭಾಗ | 2–01 |

**ಘೋಷ್ವಾರೆ**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಹೋಬಳಿ | ತಾಲ್ಲೂಕು | ಜಿಲ್ಲೆ | ಭೂಸ್ವಾಧೀನಕ್ಕೆ ಒಳಪಡುವ ಜಮೀನಿನ ವಿಸ್ತೀರ್ಣ | | |
|---|---|---|---|---|---|---|---|
| | | | | | ಐನು ಎ–ಗುಂಟೆ | ಖರಾಬು ಎ–ಗುಂಟೆ | ಒಟ್ಟು ಎ–ಗುಂಟೆ |
| 1 | ಇನಾಂಹೊಂಗಲ | ಸವದತ್ತಿ | ಸವದತ್ತಿ | ಬೆಳಗಾವಿ | 0–05 | – | 0–05 |
| 2 | ಸವದತ್ತಿ | ಸವದತ್ತಿ | ಸವದತ್ತಿ | ಬೆಳಗಾವಿ | 0–01 | – | 0–01 |
| | | | | **ಒಟ್ಟು** | **0–06** | – | **0–06** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇಂ. ವಿಜಯ್ .ಭೀ. ಚಂದಾಪುರ**

ಸರ್ಕಾರದ ಅಧೀನ ಕಾರ್ಯದರ್ಶಿ

ಬಾಹ್ಯ ಅನುದಾನಿತ ಯೋಜನೆಗಳು (EAP)

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ.

**PR. 783**

**SC. 200**

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59